## ಕರ್ನಾಟಕ ವಿಧಾನ ಪರಿಷತ್

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದಪ್ರಶ್ನೆ ಸಂಖ್ಯೆ | : | 2237 |
| 2 | ಸದಸ್ಯರ ಹೆಸರು | : | ಶ್ರೀ ಕೆ.ಟಿ.ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ) |
| 3 | ಉತ್ತರಿಸುವ ದಿನಾಂಕ | : | 18.03.2022 |
| 4 | ಉತ್ತರಿಸುವ ಸಚಿವರು | : | ಯೋಜನಾ ಸಚಿವರು |

****

| | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದ ವಿಧಾನಸಭಾ ಮತ್ತು ವಿಧಾನ ಪರಿಷತ್ ಸದಸ್ಯರಿಗೆ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ ವರ್ಷಕ್ಕೆ ನಿಗಧಿಪಡಿಸಿರುವ ಅನುದಾನವೆಷ್ಟು; ಈ ಅನುದಾನವನ್ನು ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; (ವಿವರವಾದ ಮಾಹಿತಿ ನೀಡುವುದು) | ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ ಮಾನ್ಯ ವಿಧಾನಸಭಾ ಮತ್ತು ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಿಗೆ ವರ್ಷಕ್ಕೆ ರೂ.2.00 ಕೋಟಿ ಅನುದಾನವನ್ನು ನಿಗದಿಪಡಿಸಿ, ಬಿಡುಗಡೆಗೊಳಿಸಲಾಗುತ್ತಿದೆ, ಈ ಅನುದಾನವನ್ನು ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |
| (ಆ) | ಯೋಜನೆ ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ನಿರ್ದೇಶಕರು ದಿನಾಂಕ:17.02.2022 ರಂದು ಸಂಖ್ಯೆ:ಪಿಡಿಎಸ್/82/ಕೆಎಲ್ಎಸ್/2022 (ಭಾಗ-1) ಪತ್ರದಲ್ಲಿ ಮಾಡಿರುವ ಆದೇಶವೇನು; (ಇದರ ಪ್ರತಿಯನ್ನು ನೀಡುವುದು) | ದಿನಾಂಕ:03.08.2021 ಹಾಗೂ 13.08.2021 ರಂದು ಮಾನ್ಯ ವಿಧಾನ ಪರಿಷತ್ತಿನ ಸಭಾಪತಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ 2 ವರ್ಷದ ಮೇಲ್ಪಟ್ಟು ಪ್ರಾರಂಭವಾಗದಿರುವ ಕಾಮಗಾರಿಗಳ ಅನುದಾನವನ್ನು ಹಿಂಪಡೆಯಲು ತೀರ್ಮಾನಿಸಲಾಗಿದೆ ಹಾಗೂ ದಿನಾಂಕ:27.01.2022ರಂದು ಮಾನ್ಯ ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ ಮತ್ತು ಮಾನ್ಯ ಯೋಜನಾ ಸಚಿವರೊಂದಿಗೆ ನಡೆದ ಸಭೆಯಲ್ಲಿ ಈ ಕೆಳಕಂಡ ನಿರ್ಣಯ ಕೈಗೊಳ್ಳಲಾಗಿದೆ.<br><br>2018-19 ರಿಂದ 2020-21ರ ಸಾಲಿಗೆ ಸಂಬಂಧಪಟ್ಟ ಕಾಮಗಾರಿಗಳು ಈಗಲೂ ಪ್ರಾರಂಭವಾಗದೇ ಇದ್ದಲ್ಲಿ ಸದರಿ ಕಾಮಗಾರಿಗಳನ್ನು ಸಂಬಂಧಪಟ್ಟ ಅನುಷ್ಠಾನಾಧಿಕಾರಿಗಳು ಹಾಗೂ ಅಭಿಯಂತರರುಗಳಿಂದ 2022ರ ಮಾರ್ಚ್ ಅಂತ್ಯದೊಳಗಾಗಿ ಕಾಮಗಾರಿಗಳನ್ನು ಪೂರ್ಣಗೊಳಿಸಲು ಕ್ರಮವಹಿಸುವುದು ಹಾಗೂ<br><br>2018 ರ ಹಿಂದಿನ ಅವಧಿಯಲ್ಲಿ ಅನುಮೋದನೆ ನೀಡಿರುವ ಕಾಮಗಾರಿಗಳು ಪ್ರಾರಂಭವಾಗದೇ ಇದ್ದಲ್ಲಿ ಅಂತಹ ಕಾಮಗಾರಿಗಳ ಅನುದಾನವನ್ನು ರಾಜ್ಯ ಮಟ್ಟದ ಕೇಂದ್ರೀಕೃತ ಉಳಿತಾಯ ಖಾತೆಗೆ ಜಮೆ ಮಾಡಲು, ರಾಜ್ಯದ ಎಲ್ಲಾ ಜಿಲ್ಲಾಧಿಕಾರಿಗಳಿಗೆ ಸೂಚಿಸಲು ನಿರ್ಣಯಿಸಲಾಯಿತು.<br><br>ಸದರಿ ನಿರ್ಣಯದಂತೆ ದಿನಾಂಕ:17.02.2022ರಂದು ಎಲ್ಲಾ ಜಿಲ್ಲಾಧಿಕಾರಿಗಳಿಗೆ ಸೂಚನೆ ನೀಡಲಾಗಿದೆ. |
| (ಇ) | ಈ ಪತ್ರದ ಆದೇಶದನ್ವಯ ಮಾನ್ಯ ವಿಧಾನ ಪರಿಷತ್ ಶಾಸಕರ ಅಧಿಕಾರವನ್ನು ಮೊಟಕುಗೊಳಿಸಿರುವುದು ಸರಿಯೇ; (ವಿವರವಾದ ಮಾಹಿತಿ ನೀಡುವುದು) | ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಅಧಿಕಾರವನ್ನು ಮೊಟಕುಗೊಳಿಸಿರುವುದಿಲ್ಲ. |
| (ಈ) | ಮಾನ್ಯ ಸಭಾಪತಿಯವರನ್ನು ಹೊರತುಪಡಿಸಿ ಸಭೆ ನಡೆಸಿ ನಿರ್ಧಾರ ಕೈಗೊಂಡಿರುವುದು ನಿಜವೇ? | ಇಲ್ಲ |
| (ಉ) | ಈ ಆದೇಶವನ್ನು ರದ್ದುಪಡಿಸಿ ಈ ಸಂಬಂಧ ಮಾನ್ಯ ಸಭಾಪತಿಯವರ ಶಿಫಾರಸ್ಸಿನಂತೆ ಯಾವಾಗ ಆದೇಶ ಹೊರಡಿಸಲಾಗುವುದು? | ಮಾನ್ಯ ವಿಧಾನಸಭಾಪತಿಗಳ ಪತ್ರದ ಶಿಫಾರಸ್ಸಿನಂತೆ ಕ್ರಮಕೈಗೊಂಡು 2017-18ನೇ ಸಾಲಿಗೂ ಹಿಂದಿನ ಸಾಲಿಗಳಲ್ಲಿ ಪ್ರಾರಂಭಗೊಳ್ಳದ ಕಾಮಗಾರಿಗಳ ಅನುದಾನವನ್ನು ಮಾತ್ರ ಹಿಂಪಡೆಯಲು ಕ್ರಮವಹಿಸಲಾಗುವುದು. |

ಸಂಖ್ಯೆ: ಪಿಡಿಎಸ್ 33 ಕೆಎಲ್ಎಸ್ 2022

(ಮುನಿರತ್ನ)
ಮಾನ್ಯ ತೋಟಗಾರಿಕೆ ಹಾಗೂ ಯೋಜನೆ,
ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖಾ ಸಚಿವರು.